## ಕರ್ನಾಟಕ ವಿಧಾನ ಪರಿಷತ್ತು

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: | 1494 |
| ಮಾನ್ಯ ಸದಸ್ಯರ ಹೆಸರು: | ಶ್ರೀ ಘೋಟ್ನೇಕರ ಶ್ರೀಕಾಂತ ಲಕ್ಷ್ಮಣ (ಸ್ಥಳೀಯ ಸಂಸ್ಥೆಗಳಿಂದ ಚುನಾಯಿತರಾದವರು) |
| ಉತ್ತರಿಸಬೇಕಾದವರು: | ಅಬಕಾರಿ ಸಚಿವರು |
| ಉತ್ತರಿಸಬೇಕಾದ ದಿನಾಂಕ: | 19-03-2020 |

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಕಾರವಾರ ಜಿಲ್ಲೆಯಲ್ಲಿ ವಿವಿಧ ಗ್ರಾಮಗಳಲ್ಲಿ/ಸ್ಥಳಗಳಲ್ಲಿ ನಿಯಮ ಮೀರಿ ಎಂ.ಎಸ್.ಐ.ಎಲ್/ಸಿಎಲ್-2-ಸಿ-7 ಮತ್ತು ಇತರ ಎಂ.ಆರ್.ಪಿ. ಅಂಗಡಿ/ವೈನ್ ಶಾಪ್ ಗಳು ಸರ್ಕಾರದ ಎಂ.ಆರ್.ಪಿ. ದರಕ್ಕಿಂತ ಹೆಚ್ಚಿನ ಬೆಲೆಗೆ ಮಾರಾಟ ಮಾಡುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ, ಇದನ್ನು ತಡೆಗಟ್ಟಲು ಕೈಗೊಂಡ ಕ್ರಮಗಳೇನು; (ಸಂಪೂರ್ಣ ಮಾಹಿತಿ ನೀಡುವುದು) | ಬಂದಿದೆ.<br>ಮದ್ಯವನ್ನು ಗರಿಷ್ಠ ಮಾರಾಟ ಬೆಲೆ (ಎಂ.ಆರ್.ಪಿ) ದರದಲ್ಲಿ ಮಾರಾಟ ಮಾಡುವುದು ಸಿಎಲ್-2 (ವೈನ್ ಸ್ಟೋರ್) ಸನ್ನದುಗಳಿಗೆ ಮಾತ್ರ ಅನ್ವಯಿಸುತ್ತದೆ.<br>ಗರಿಷ್ಟ ಮಾರಾಟ ಬೆಲೆ (ಎಂ.ಆರ್.ಪಿ) ದರಕ್ಕಿಂತ ಹೆಚ್ಚಿನ ದರಕ್ಕೆ ಮದ್ಯ ಮಾರಾಟ ಮಾಡುವುದು ಕಂಡುಬಂದ ಸಿಎಲ್-2 ಮತ್ತು ಎಂ.ಎಸ್.ಐ.ಎಲ್ ಸನ್ನದು ಮಳಿಗೆಗಳ ವಿರುದ್ಧ ಪ್ರಕರಣಗಳನ್ನು ದಾಖಲು ಮಾಡಲಾಗಿದ್ದು, 2018-2019ನೇ ಅಬಕಾರಿ ಸಾಲಿನಲ್ಲಿ 51 ಮತ್ತು 2019-20 (ಫೆಬ್ರವರಿ 2020 ರವರೆಗೆ)ನೇ ಅಬಕಾರಿ ಸಾಲಿನಲ್ಲಿ 31 ಪ್ರಕರಣಗಳನ್ನು ಉತ್ತರ ಕನ್ನಡ(ಕಾರವಾರ) ಜಿಲ್ಲೆಯಲ್ಲಿ ದಾಖಲು ಮಾಡಲಾಗಿದೆ. |
| ಆ) | ಕಾರವಾರ ಜಿಲ್ಲೆಯಲ್ಲಿ ಎಂ.ಎಸ್.ಐ.ಎಲ್. ಮದ್ಯದ ಅಂಗಡಿಗಳಲ್ಲಿ ಪ್ರತಿ ಎಂ.ಆರ್.ಪಿ. ದರದ ಮೇಲೆ ಬಾಟಲಿಗೆ ಹೆಚ್ಚಿನ ದರ ವಸೂಲಿ ಮಾಡುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿರುತ್ತದೆಯೇ; ಕಾರವಾರ ಅಬಕಾರಿ ಇಲಾಖೆಯವರು ಎಷ್ಟು ಎಂ.ಎಸ್.ಐ.ಎಲ್. ವೈನ್ ಶಾಪ್ ಅಂಗಡಿಗಳ ಮೇಲೆ ಕೇಸುಗಳನ್ನು ದಾಖಲಿಸಿದೆ; (ಎಂ.ಎಸ್.ಐ.ಎಲ್. ಮದ್ಯದ ಅಂಗಡಿಗಳವಾರು, ತಾಲ್ಲೂಕುವಾರು, ದಿನಾಂಕದೊಂದಿಗೆ ಸಂಪೂರ್ಣ ವಿವರ ನೀಡುವುದು) | ಬಂದಿರುತ್ತದೆ.<br>ಅಂತಹ ಎಂ.ಎಸ್.ಐ.ಎಲ್ ಸನ್ನದು ಮಳಿಗೆಗಳ ವಿರುದ್ಧ ಸನ್ನದು ಷರತ್ತು ಉಲ್ಲಂಘನೆಗಾಗಿ ಪ್ರಕರಣಗಳನ್ನು ದಾಖಲು ಮಾಡಲಾಗಿದೆ. 2018-2019ನೇ ಮತ್ತು 2019-20 (ಫೆಬ್ರವರಿ 2020ರವರೆಗೆ)ನೇ ಅಬಕಾರಿ ಸಾಲಿನಲ್ಲಿ ದಾಖಲು ಮಾಡಿದ 08 ಪ್ರಕರಣಗಳ ವಿವರಗಳನ್ನು ಅನುಬಂಧದಲ್ಲಿ ನೀಡಿದೆ. |

| | | |
|---|---|---|
| ಇ) | ಜಿಲ್ಲೆಯ ಕೆಲವೊಂದು ತಾಲ್ಲೂಕುಗಳಲ್ಲಿ ಬಾರ್ ಲೈಸೆನ್ಸ್ ಹೊಂದಿರುವ ಮಾಲೀಕರು ತಮ್ಮಲ್ಲಿರುವ ಮದ್ಯವನ್ನು ಹಳ್ಳಿಗಳಲ್ಲಿ ಮಾರಾಟ ಮಾಡುತ್ತಿದ್ದರೂ, ಅಬಕಾರಿ/ಪೊಲೀಸ್ ಇಲಾಖೆಯವರು ಸ್ಪಂದಿಸದಿರುವುದು ಸರಿಯೇ; ಈ ಬಗ್ಗೆ ಸಂಬಂಧಿಸಿದವರ ಮೇಲೆ ಕ್ರಮಕೈಗೊಳ್ಳುವರೇ; ಹಾಗೂ ಸಂಬಂಧಿಸಿದ ಬಾರ್ ಮಾಲೀಕರಿಗೆ ನೋಟೀಸ್ ಜಾರಿ ಮಾಡಿ ಹೊರಗಡೆ ಮದ್ಯ ಮಾರಾಟ ಕಂಡು ಬಂದಲ್ಲಿ,ಅವರ ಪರವಾನಗಿ ರದ್ದುಗೊಳಿಸಲು ಕ್ರಮ ಕೈಗೊಳ್ಳಲಾಗುವುದೇ; (ವಿವರ ನೀಡುವುದು) | ಕೆಲವು ವ್ಯಕ್ತಿಗಳು ಸ್ವಲಾಭಕ್ಕಾಗಿ ತೆರಿಗೆ ಪಾವತಿಸಿದ ಮದ್ಯವನ್ನು ಸನ್ನದು ಮಳಿಗೆಗಳಿಂದ ಖರೀದಿಸಿ ಅನಧಿಕೃತವಾಗಿ ಚಿಲ್ಲರೆ ಅಂಗಡಿಗಳಲ್ಲಿ ಹೆಚ್ಚಿನ ದರಕ್ಕೆ ಮಾರಾಟ ಮಾಡುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿರುತ್ತದೆ. ಅಂತಹ ಚಟುವಟಿಕೆಗಳನ್ನು ತಡೆಯಲು ಸೂಕ್ತ ಕ್ರಮ ಜರುಗಿಸಲಾಗುತ್ತಿದೆ. ಆದರೆ ಲೈಸೆನ್ಸ್ ಹೊಂದಿರುವ ಮಾಲೀಕರು ತಮ್ಮಲ್ಲಿರುವ ಮದ್ಯವನ್ನು ನೇರವಾಗಿ ಹಳ್ಳಿಗಳಲ್ಲಿ ಅನಧಿಕೃತವಾಗಿ ಮಾರಾಟ ಮಾಡುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿರುವುದಿಲ್ಲ. |
| ಈ) | ಮದ್ಯ ಮಾರಾಟದಲ್ಲಿ ಪೈಟೋಗಳನ್ನು ತಪ್ಪಿಸಲು ಮತ್ತು ಜನರನ್ನು ವಂಚಿಸುವುದನ್ನು ತಪ್ಪಿಸಲು ಮದ್ಯದ ಮಾರಾಟ ದರವನ್ನು ಸಾರ್ವಜನಿಕರಿಗೆ ಬೋರ್ಡ್‌ಗಳಲ್ಲಿ ಹಾಕಬೇಕೆಂದು ಕಡ್ಡಾಯ ಮಾಡಲು ಸಾಧ್ಯವೇ? | ಮದ್ಯವನ್ನು ಗರಿಷ್ಟ ಮಾರಾಟ ಬೆಲೆ (ಎಂ.ಆರ್.ಪಿ) ದರದಲ್ಲಿ ಮಾರಾಟ ಮಾಡುವುದು ಸಿಎಲ್–2 (ವೈನ್ ಸ್ಟೋರ್) ಸನ್ನದುಗಳಿಗೆ ಮಾತ್ರ ಅನ್ವಯಿಸುತ್ತಿದ್ದು, ಮದ್ಯದ ಮಾರಾಟ ದರವನ್ನು ಬೋರ್ಡ್‌ಗಳಲ್ಲಿ ಹಾಕುವ ಬಗ್ಗೆ ಕರ್ನಾಟಕ ಅಬಕಾರಿ (ಸನ್ನದುಗಳ ಸಾಮಾನ್ಯ ಷರತ್ತುಗಳು) ನಿಯಮಗಳು, 1967 ರ ನಿಯಮ 6 ರಲ್ಲಿ ಹಾಗೂ ಸಿಎಲ್–2 ಸನ್ನದು ಷರತ್ತು 8 ಎ ರಲ್ಲಿ ತಿಳಿಸಲಾಗಿರುತ್ತದೆ ಹಾಗೂ ಅಬಕಾರಿ ಇಲಾಖೆಯ ಸುತ್ತೋಲೆ ಸಂಖ್ಯೆ ಇಸಿಸಿ/33/ ಸಿಆರ್‌ಎಂ/2007 ದಿನಾಂಕ: 31.01.2009 ರನ್ವಯ ನಿರ್ದೇಶನವನ್ನು ಸಹ ನೀಡಿ ಹೆಚ್ಚಿನ ದರ ವಿಧಿಸಿ ಜನರನ್ನು ವಂಚಿಸುವುದನ್ನು ತಪ್ಪಿಸಲು ಕ್ರಮ ಕೈಗೊಳ್ಳಲಾಗಿದೆ. |

18/3/20

(ಎಚ್. ನಾಗೇಶ್)
ಅಬಕಾರಿ ಸಚಿವರು

ಆಇ 34 ಇಎಲ್ ಕ್ಯೂ 2020

ವಿಧಾನಪರಿಷತ್ತಿನ ಚುಕ್ಕೆ ಗುರುತಿಲ್ಲದ ಪಶ್ನೆ ಸಂಖ್ಯೆ:1494 ಕ್ಕೆ ಉತ್ತರದ ಅನುಬಂಧ

ಉತ್ತರ ಕನ್ನಡ ಜಿಲ್ಲೆಯ ವ್ಯಾಪ್ತಿಯಲ್ಲಿ ಕಾರ್ಯನಿರ್ವಹಿಸುತ್ತಿರುವ ಎಂ.ಎಸ್.ಐ.ಎಲ್. ಮದ್ಯದಂಗಡಿಗಳಲ್ಲಿ ಎಂ.ಆರ್.ಪಿ. ದರಕ್ಕಿಂತ ಹೆಚ್ಚಿನ ದರ ವಿಧಿಸಿದ ಸಂಬಂಧ ದಾಖಲಿಸಿದ ಪ್ರಕರಣಗಳ ವಿವರ

**2018-19 ನೇ ಅಬಕಾರಿ ಸಾಲು**

| ಕ್ರ.ಸಂ. | ತಾಲ್ಲೂಕು | ಸನ್ನದಿನ ಸಂಖ್ಯೆ | ಸನ್ನದಿನ ವಿಳಾಸ | ಪ್ರಕರಣದ ಸಂಖ್ಯೆ ಮತ್ತು ದಿನಾಂಕ |
|---|---|---|---|---|
| 1 | ಅಂಕೋಲ | ನಂ: ಇಎಕ್ಸ್ಇ/ಯುಕೆ/ಸಿಎಲ್/11ಸಿ/ಎಎನಕೆ/02/18-19 | ಅಂಕೋಲಾ ತಾಲ್ಲೂಕು ಅಂಕೋಲಾ- ಕಾರವಾರ ರಸ್ತೆ, ಕಟ್ಟಡ ಸಂಖ್ಯೆ: 1332/1ಸಿ | 41/18-19 ದಿ:24-04-2019 |
| 2 | ಯಲ್ಲಾಪುರ | ನಂ: ಇಎಕ್ಸ್ಇ/ಯುಕೆ/ಸಿಎಲ್/11ಸಿ/ವೈಎಲ್‌ಪಿ/04/18-19 | ಯಲ್ಲಾಪುರ ತಾಲ್ಲೂಕು ಗಂಪೂಜಾ ಕಂಪ್ಲೇಕ್ಸ್, ಶಾಪ್ ನಂ:992, 993 | 25/18-19 ದಿ:6-3-2019 |
| 3 | ದಾಂಡೇಲಿ | ನಂ: ಇಎಕ್ಸ್ಇ/ಯುಕೆ/ಸಿಎಲ್/11ಸಿ/ಡಿಎನ್‌ಡಿ/04/18-19 | ಹಳಿಯಾಳ ತಾಲ್ಲೂಕು, ದಾಂಡೇಲಿ ಕೆ.ಸಿ. ಸರ್ಕಲ್ ಛರ್ಚ ರೋಡ್ ಡೋರ ನಂ: 4/1409ಎ/1 | 10/18-19 ದಿ:20-10-2018 |
| 4 | ಜೊಯಿಡಾ | ನಂ:ಇಎಕ್ಸ್ಇ/ಯುಕೆ/ಸಿಎಲ್-11ಸಿ/ಡಿಎನ್‌ಡಿ/02/18-19 | ಜೊಯಿಡಾ ತಾಲ್ಲೂಕು, ರಾಮನಗರ, ಡೋರ ನಂ: 49 ಸ.ನಂ: 58ಎ | 13/18-19 ದಿ:08-03-2019 |

**2019-20 ನೇ ಅಬಕಾರಿ ಸಾಲು (ಫೆಬ್ರವರಿ ಅಂತ್ಯದವರೆಗೆ)**

| ಕ್ರ.ಸಂ | ತಾಲ್ಲೂಕು | ಸನ್ನದಿನ ಸಂಖ್ಯೆ | ಸನ್ನದಿನ ವಿಳಾಸ | ಪ್ರಕರಣದ ಸಂಖ್ಯೆ ಮತ್ತು ದಿನಾಂಕ |
|---|---|---|---|---|
| 1 | ಕಾರವಾರ | ನಂ: ಇಎಕ್ಸ್ಇ/ಯುಕೆ/ಸಿಎಲ್/11ಸಿ/ಕೆಡಬ್ಲ್ಯೂಆರ್/7/19-20 | ಕಾರವಾರ ತಾಲ್ಲೂಕು ಪಿಕಳೆ ರೋಡ ಮಿನಿಕ್ರಿಷ್ ಬಿಲ್ಡಿಂಗ್, ಡೋರ ನಂ: 602/ಜಿ/ 2 | 4/19-20 ದಿ:17-08-2019 |
| 2 | ಕುಮಟಾ | ನಂ: ಇಎಕ್ಸ್ಇ/ಯುಕೆ/ಸಿಎಲ್/11ಸಿ/ಕೆಎಂಟಿ/8/19-20 | ಕುಮಟಾ ತಾಲ್ಲೂಕು ಬಂಕಿಕಡ್ಲ ಮುಖ್ಯ ರಸ್ತೆ, ಕಟ್ಟಡ ಸಂಖ್ಯೆ 47, ಸ.ನಂ:43/ಬಿ-2 | 25/19-20 ದಿ:29-02-2020 |
| 3 | ಯಲ್ಲಾಪುರ | ನಂ:ಇಎಕ್ಸ್ಇ/ಯುಕೆ/ಸಿಎಲ್-11ಸಿ/ವೈಎಲ್‌ಪಿ/08/18-19 | ಯಲ್ಲಾಪುರ ತಾಲ್ಲೂಕು ಗಂಪೂಜಾ ಕಂಪ್ಲೇಕ್ಸ್ ಶಾಪ್ ನಂ: 992, 993 | 12/19-20 ದಿ:29-11-2019 |
| | | | | 25/19-20 ದಿ:31-01-2020 |
| 4 | ಮುಂಡಗೋಡ | ನಂ:ಇಎಕ್ಸ್ಇ/ಯುಕೆ/ಸಿಎಲ್ - 11ಸಿ/ವೈಎಲ್‌ಪಿ/04/18-19 | ಮುಂಡಗೋಡ ತಾಲ್ಲೂಕು ಭದ್ರಾಪುರ, ಪಾಳಾ ಗ್ರಾಮ, ಕಟ್ಟಡ ಸಂಖ್ಯೆ 396 ಸಂ.ನಂ:33/4 | 7/19/20 ದಿ:28-10-2019 |

ಆಇ 34 ಇಎಲ್ ಕ್ಯೂ 2020